## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1248

ಸದಸ್ಯರ ಹೆಸರು : ಶ್ರೀ ಅಲ್ಲಂ ವೀರಭದ್ರಪ್ಪ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 23.12.2021

ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುಂಗಭದ್ರಾ ಆಣೆಕಟ್ಟೆಯಲ್ಲಿ ಹೂಳು ತುಂಬಿರುವುದರಿಂದ, ಸದರಿ ಡ್ಯಾಂಗೆ ಪರ್ಯಾಯವಾಗಿ ನವಲಿ ಹತ್ತಿರ ಸಮತೋಲನಾ ಜಲಾಶಯವನ್ನು ನಿರ್ಮಾಣ ಮಾಡುವ ಕಾರ್ಯ ಯಾವ ಹಂತದಲ್ಲಿದೆ; | ತುಂಗಭದ್ರಾ ಆಣೆಕಟ್ಟೆಯಲ್ಲಿ ಹೂಳು ತುಂಬಿರುವುದರಿಂದ, ಸದರಿ ಡ್ಯಾಂಗೆ ಪರ್ಯಾಯವಾಗಿ ನವಲಿ ಹತ್ತಿರ ಸಮತೋಲನಾ ಜಲಾಶಯವನ್ನು ನಿರ್ಮಾಣ ಮಾಡುವ ಪ್ರಸ್ತಾವನೆಯು, ತುಂಗಭದ್ರಾ ಮಂಡಳಿಯ ಪರಿಶೀಲನೆಯಲ್ಲಿರುತ್ತದೆ.<br><br>2020-21ರ ಆಯವ್ಯಯದಲ್ಲಿ ಸದರಿ ಪ್ರಸ್ತಾವನೆಯ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ರೂ.20.00 ಕೋಟಿಗಳ ಅನುದಾನವನ್ನು ಒದಗಿಸುವ ಬಗ್ಗೆ ಘೋಷಣೆಯಾಗಿರುತ್ತದೆ.<br><br>ಸಮತೋಲನಾ ಜಲಾಶಯ ನಿರ್ಮಿಸುವ ಸಲುವಾಗಿ ಸರ್ವೇ ಸಮೀಕ್ಷೆ ಕೈಗೊಳ್ಳಲು ರೂ.14.30 ಕೋಟಿಗಳ ಮೊತ್ತದ ಅಂದಾಜಿಗೆ ದಿನಾಂಕ:16.05.2020 ರಂದು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.<br><br>ಸದರಿ ಯೋಜನೆಯ ಸರ್ವೇ ಕನ್ಸಲ್ಟೆನ್ಸಿ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಅಂತಿಮಗೊಂಡಿದ್ದು, ಸರ್ವೇ ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಆ) | ಇದಕ್ಕಾಗಿ ಅವಶ್ಯವಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು? | |

ಸಂಖ್ಯೆ: ಜಸಂಇ 262 ಎಂಎಲ್‌ಎ 2021

(ಗೋವಿಂದ ಎಂ.ಕಾರಜೋಳ)
ಜಲಸಂಪನ್ಮೂಲ ಸಚಿವರು